# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಯು.ಬಿ.ವೆಂಕಟೇಶ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 02

ಉತ್ತರಿಸಬೇಕಾದ ದಿನಾಂಕ : 15-02-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಸಹಕಾರಿ ನೀತಿಯನ್ನು ಸರ್ಕಾರವು ಅಳವಡಿಸಿಕೊಂಡಿದೆಯೇ: | ರಾಜ್ಯದಲ್ಲಿ ಹಿಂದಿನಿಂದಲೂ ಸಹಕಾರ ಚಳುವಳಿಗೆ ಪೂರಕವಾದ ವಾತಾವರಣ ಸೃಜಿಸಲು ಅಗತ್ಯವಿರುವ ಅವಕಾಶಗಳನ್ನು ಗಮನದಲ್ಲಿಟ್ಟುಕೊಂಡು, ಅದಕ್ಕೆ ಪೂರಕವಾಗಿ ಕಾಲಕಾಲಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ನಿಯಮಗಳು 1960 ಹಾಗೂ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ 1997 ನಿಯಮ 2004 ರನ್ವಯ ಸಹಕಾರ ಸಂಘಗಳು/ಸೌಹಾರ್ದ ಸಹಕಾರಿಗಳು ಕಾರ್ಯನಿರ್ವಹಿಸುತ್ತಿದ್ದು, ಈ ಕಾಯ್ದೆಗಳಿಗೆ ಅಗತ್ಯಕ್ಕನುಗುಣವಾಗಿ ಕಾಲಕಾಲಕ್ಕೆ ತಿದ್ದುಪಡಿಗಳನ್ನು ಅಳವಡಿಸಿಕೊಳ್ಳಲಾಗಿದೆ. |
| (ಆ) | ಇಲ್ಲದಿದ್ದಲ್ಲಿ, ಸದರಿ ನೀತಿಯನ್ನು ಅಳವಡಿಸಿಕೊಳ್ಳುವುದೇ; | ಉದ್ಭವಿಸುವುದಿಲ್ಲ |
| (ಇ) | ಹಾಗಿದ್ದಲ್ಲಿ, ಎಂದಿನಿಂದ ಜಾರಿಗೆ ತರಲಾಗುವುದು; | ಉದ್ಭವಿಸುವುದಿಲ್ಲ |
| (ಈ) | ಸಹಕಾರಿ ರಂಗದಲ್ಲಿ ಬರುವ ಎಲ್ಲಾ ಸಹಕಾರ ಸಂಘಗಳ ವ್ಯವಹಾರಗಳನ್ನು ಗಣಕೀಕರಣಗೊಳಿಸಿದಲ್ಲಿ ಅವ್ಯವಹಾರ ಹಾಗೂ ಹಣ ದುರುಪಯೋಗ ಕಡಿಮೆಯಾಗುತ್ತದೆಯೇ; ಈ ಬಗ್ಗೆ ಸರ್ಕಾರದ ನಿರ್ಧಾರವೇನು? | ಹೌದು, ಸಹಕಾರ ಸಂಘಗಳ ವ್ಯವಹಾರಗಳನ್ನು ಗಣಕೀಕರಣಗೊಳಿಸಿದಲ್ಲಿ ಅವ್ಯವಹಾರ ಹಾಗೂ ಹಣ ದುರುಪಯೋಗ ಕಡಿಮೆಯಾಗಬಹುದೆಂದು ಅಭಿಪ್ರಾಯಪಟ್ಟಿದೆ.<br><br>ಮೊದಲ ಹಂತಗಳಲ್ಲಿ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಪ್ರಾಥಮಿಕ ಕೃಷಿಪತ್ತಿನ ಸಹಕಾರ ಸಂಘಗಳನ್ನು, ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ಸಹಕಾರ ಸಂಘಗಳ ಸಹಭಾಗಿತ್ವದಲ್ಲಿ ಪ್ರಸಕ್ತ ಸಾಲಿನಿಂದ ಗಣಕೀಕರಣಗೊಳಿಸಲು ಕ್ರಮವಹಿಸಲಾಗುತ್ತಿದೆ. ನಂತರ ಇತರೆ ಸಂಘಗಳ ಗಣಕೀಕರಣದ ಬಗ್ಗೆ ಪರಿಶೀಲಿಸಲಾಗುವುದು. |

**ಕಡತ ಸಂಖ್ಯೆ ಸಿಒ 32 ಸಿಎಲ್‌ಎಸ್ 2022**

(ಎಸ್. ಟಿ. ಸೋಮಶೇಖರ್)

ಸಹಕಾರ ಸಚಿವರು